# ಶ್ರೀ ರಾಘವೇಂದ್ರ ಅಶ್ವಧಾಟೀ ಸ್ತೋತ್ರಮ್

**ಯೋ ರಾಧಿಕಾರಮಣಮಾರಾಧಯನ್**
**ಅವತತಾರಾಽಮರ-ದ್ಯುತಿ-ನರಾ-**
**-ಕಾರಾಽನ್ವಿತೋಽತ್ರ ಭವ-ಕಾರಾಗೃಹೋದ್ಭವ-ನಿ**
**ಕಾರಾರ್ತಿ-ನಾಶನ-ಕೃತೇ।**
**ನಾರಾಯಣ-ಸ್ತ್ರವನ-ಪಾರಾಯಣಾದ್ಯ ಭವ-**
**ಪಾರಾಯಣಾಯ ಭವ ನಃ**
**ಶ್ರೀರಾಘವೇಂದ್ರ ದಿಶ ವೈರಾಗ್ಯಮರ್ಘ-ಸುಖ-**
**ನೈರಾಶ್ಯಮಾಶು ಗುರುರಾಟ್॥೧॥**

ರಾಧಾರಮಣನಾದ ಶ್ರೀ ಕೃಷ್ಣನನ್ನು ಆರಾಧನೆಗೈಯ್ಯಲಿಕ್ಕಾಗಿ ದೈವೀ ತೇಜಸ್ಸಿನಿಂದ ಒಡಗೂಡಿದ ಯಾವ ರಾಘವೇಂದ್ರ ಸ್ವಾಮಿಗಳು ಸಂಸಾರವೆಂಬ ಕಾರಾಗೃಹದಿಂದ ಉಂಟಾಗುವ ದುಃಖ-ದುಮ್ಮಾನಗಳನ್ನು ನಾಶ ಮಾಡಲಿಕ್ಕಾಗಿ ಇಲ್ಲಿ ಅವತಾರ ಮಾಡಿದರೋ ಅಂಥ ನಾರಾಯಣನ ಸ್ತೋತ್ರ ಪಾರಾಯಣಗಳನ್ನು ಮಾಡುವ ರಾಘವೇಂದ್ರ ಸ್ವಾಮಿಗಳೇ ನೀವು ನಮಗೆ ವಿಷಯ ಸುಖದ ಆಶೆಯನ್ನು ಬಿಡಿಸಿ ವೈರಾಗ್ಯವನ್ನು ದಯಪಾಲಿಸಿರಿ ಮತ್ತು ಗುರುರಾಜರಾದ ತಾವು ನಮ್ಮನ್ನು ಈ ಸಂಸಾರದಿಂದ ಪಾರು ಮಾಡಿರಿ.

**ತುಂಗಾ-ನದೀ ಚಲ-ತರಂಗಾ ಹಿ ಯಚ್ಚರಣ**
**ಸಂಗಾತ್ಸು-ಪಾವನತಯೋ-**
**-ತ್ತುಂಗಾಽಖಿಲಾಘ-ಕುಲ-ಭಂಗಾಯ ಸಾ ಭಜತಿ**
**ಗಂಗಾ-ತುಲಾಂ ಗುರುಮಮುಮ್।**
**ಶೃಂಗಾರ-ಸಾರ-ಭೃದನಂಗಾಂಗ-ದಾಹಜಮಿ**
**ವಾಂಗಾರಮುದ್ವಹತಿ ಯಃ**
**ತಂ ಗಾನ-ಹರ್ಷಿತ-ಹರಿಂ ಗಾಢ-ಭಕ್ತಿ-ಭರ-**
**-ತೋಽಂಗಾಽಶು ಯಾಹಿ ಶರಣಮ್॥೨॥**

ಚಂಚಲ ತರಂಗಗಳುಳ್ಳ ತುಂಗಾ ನದಿಯು ಯಾರ ಸಂಗ ಸಹವಾಸದಿಂದ ಪರಮ ಪವಿತ್ರಳಾಗಿ ಗಂಗಾ ನದಿಯ ಸಾಮ್ಯವನ್ನು ಹೊಂದಿರುತ್ತಾಳೆಯೋ ಮತ್ತು ಮಹಿಮೆಯಿಂದ ಉನ್ನತಳಾಗಿ ಪಾಪ ಸಮೂಹವನ್ನು ನಾಶ ಮಾಡಲು ಸಮರ್ಥಳಾಗಿರುತ್ತಾಳೆಯೋ ಮತ್ತು ಈ ರಾಘವೇಂದ್ರ ಗುರುಗಳು ಶೃಂಗಾರಸಾರನಾದ ಕಾಮನನ್ನು ದಹಿಸುವದರಿಂದ ಜನಿಸಿದಂತಿರುವ ಅಂಗಾರವನ್ನು ಧರಿಸಿರುತ್ತಾರೆ ಹಾಗೂ ತಮ್ಮ ಗಾಯನದಿಂದ ಶ್ರೀ ಹರಿಯನ್ನು ಸಂತೋಷ ಪಡಿಸುತ್ತಾರೆ ಇಂಥಹ ಗುರುಗಳನ್ನು ಅಯ್ಯಾ ಮಾನವ ನೀನು ಶರಣು ಹೋಗು.

**ನೀಚಾನುಪೈಷಿ ರಸವಾಚಾ-ಸ್ತ್ರವೀಷಿ ತನು**
**ಮಾಚಾಲಯನ್ ಶುನಕವತ್**
**ರೇ ಚಾಪಲಾದ್ಧನ-ಪಿಶಾಚಾಯಿತೋ ನಟಸಿ**
**ಹಾ ಚಾತುರೀ ತವ ವೃಥಾ।**
**ಪ್ರಾಚಾಂ ಸು-ಸಮ್ಮತಮನೂಚಾನಮಾಚರ**
**ಸದಾಚಾರ ಮೀಶ-ಭಜನಂ**
**ಶೌಚಾದಿಕಂ ಚ ವಸುಧಾ-ಚಾರಿ-ದೇವ-ಗುರು-**
**-ಣಾಚಾರ್ಯವಾನ್ ಭವ-ಸಖೇ॥೩॥**

ಮಿತ್ರನೇ, ನೀನು ನೀಚರ ಬಳಿಗೆ ಹೋಗುತ್ತೀ. ಅವರ ಎದುರು ನಾಯಿಯಂತೆ ದೇಹವನ್ನು ಅಲುಗಾಡಿಸುತ್ತಾ ರಸಮಯವಾದ ವಾಣಿಯಿಂದ ಅವರನ್ನು ಸ್ತೋತ್ರ ಮಾಡುತ್ತಿ. ಚಾಪಲ್ಯದಿಂದ, ಅಯ್ಯಾ ನೀನು ಧನ ಪಿಶಾಚಿಯಂತೆ ವರ್ತಿಸುತ್ತಿ. ನಿನ್ನ ಚಾಪಲ್ಯವೆಲ್ಲಾ ವ್ಯರ್ಥ. ಪ್ರಾಚೀನರಾದ ನಮ್ಮ ಹಿಂದಿನ ಹಿರಿಯರಿಗೆ ಅತ್ಯಂತ ಸಮ್ಮತವಾದ ಸದಾಚಾರವನ್ನು ಪಾಲಿಸು. ಮಡಿ-ಮೈಲಿಗೆ ಮೊದಲಾದ ಶೌಚಾಚಾರವನ್ನು ತಪ್ಪದೇ ಪಾಲಿಸು ಪರಮೇಶ್ವರನ ಭಜನೆಯನ್ನು ಸದಾ ಮಾಡು. ಭೂಮಿಯಲ್ಲಿ ಸಂಚಾರ ಮಾಡುವ ದೇವತೆಯಂತಿರುವ ಶ್ರೀ ರಾಘವೇಂದ್ರ ಸ್ವಾಮಿಗಳನ್ನು ನಿನ್ನ ಉದ್ಧಾರ ಮಾಡುವ ಆಚಾರ್ಯರನ್ನಾಗಿ ಮಾಡಿಕೋ.

**ದೈವಾನ್ನರತ್ವಮಧುನಾಽವಾಪ್ಯ ಕಿಂ ಭ್ರಮಸಿ**
**ಶೈವಾಗಮೋಕ್ತ್ರವಚಸಾ**
**ನೈವಾಪರೋಽಸ್ತಿ ವರ-ದೇವಾವಲೌ ಖಲು**
**ಪರೋ ವಾಸುದೇವತ ಇಹ॥**
**ಶ್ರೀ-ವಾಯುತೋ ನ ಗುರುರೇವಾಪರೋಽಸ್ತಿ ಚ**
**ತದಾವಾಸತೋಽತ್ರ ಮಹಿತಮ್**
**ಸೇವಾ-ವ್ರತೈರ್ಯಜ ನೃ-ದೇವಾಯಿತಂ ಗುರು**
**ಮತೀವಾನುಕಂಪಿ ಯಮಿನಮ್॥೪॥**

ಸುದೈವದಿಂದ ನೀನು ಮನುಷ್ಯನಾಗಿ ಈಗ ಇಲ್ಲಿ ಹುಟ್ಟಿರುವೆ. ಶೈವಾಗಮದಲ್ಲಿ ಹೇಳಿದ ಮಾತಿನಿಂದ ನೀನು "ನಾನೇ ದೇವರು ಜಗತ್ತೆಲ್ಲಾ ಮಿಥ್ಯ" ಎಂಬ ಭ್ರಮೆಗೆ ಒಳಗಾಗಬೇಡ. ಶ್ರೇಷ್ಠರಾದ ದೇವತೆಗಳ ಸಮೂಹದಲ್ಲಿಯೂ ವಾಸುದೇವನಿಗಿಂತ ಮಿಗಿಲಾದವರು ಬೇರೆ ಯಾರೂ ಇಲ್ಲ, ಅದರಂತೆ ವಾಯು ದೇವರಿಗಿಂತ ಅಧಿಕರಾದ ಗುರುಗಳು ಬೇರೆ ಯಾರೂ ಇಲ್ಲ, ಆದುದರಿಂದ

ಆ ವಾಯು ದೇವರ ಆವೇಶದಿಂದ ಮಹಾಮಹಿಮೋಪೇತರಾದ ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಸೇವಾವ್ರತಗಳಿಂದ ಪೂಜಿಸು. ಈ ಗುರುಗಳು ಮನುಷ್ಯರಲ್ಲಿ ದೇವತೆಗಳಂತೆ ಇದ್ದು ಎಲ್ಲರ ಮೇಲೆ ಕರುಣೆಯನ್ನು ತೋರುವ ಮಹಾಮಹಿಮರು ಆಗಿರುತ್ತಾರೆ.

**ಕಾಂತಾ-ಸುತಾದಿ-ಘನ-ಚಿಂತಾ-ಶತೈರ್ಮನುಜ**

**ಕಿಂ ತಾಮ್ಯಸಿ ಸ್ಥಿತಮಹೋ**

**ಚಿಂತಾ-ಮಣೀಂದ್ರ ವದನಂತಾರ್ಥಿತ ಪ್ರದ**

**ಮುನಿಂ ತಾತ ಮಂತ್ರಸದನೇ॥**

**ಸಂತಾನ-ವೃಕ್ಷಮಿವ ಸಂತಾನ-ಭಾಗ್ಯ-ಸುಖ-**

**ಸಂತಾನದಂ ಭವ-ಶುಚಃ**

**ಸಂತಾರಕಂ ನಿಖಿಲ ಸಂತಾಪ-ನಾಶನ-**

**-ಮಮುಂ ತಾವದಾಶ್ರಯ-ಗುರುಮ್॥೫॥**

ಮಾನವನೇ ಹೆಂಡತಿ, ಮಕ್ಕಳು ಮೊದಲಾದ ನೂರಾರು ಘನ ಚಿಂತೆಗಳಿಂದ ಏಕೆ ಕಷ್ಟ ಪಡುವೆ. ಚಿಂತಾಮಣಿಯಂತೆ ಅನಂತವಾದ ಕಾಮನೆಗಳನ್ನೆಲ್ಲ ಪೂರ್ಣ ಮಾಡಿಕೊಡುವ ಮಹಾ ಮುನಿಗಳು ನೆಲೆಸಿದ್ದಾರೆ. ಇವರು ಸ್ವರ್ಗದಲ್ಲಿಯ ಸಂತಾನ ವೃಕ್ಷ ಎಂದರೆ ಕಲ್ಪವೃಕ್ಷದಂತೆ ಸಂತಾನ ಭಾಗ್ಯವನ್ನು ಮತ್ತು ಸುಖ ಸಂತಾನವನ್ನು ಅಂದರೆ ಸೌಖ್ಯದ ಪರಂಪರೆಯನ್ನು ನೀಡುತ್ತಾರೆ ಮತ್ತು ಸಂಸಾರ ದುಃಖದಿಂದ ಪಾರು ಮಾಡುತ್ತಾರೆ. ಎಲ್ಲರ ಎಲ್ಲಾ ತರಹದ ಸಂತಾಪಗಳನ್ನು ಕಳೆಯುವ ಈ ರಾಘವೇಂದ್ರ ಗುರುಗಳನ್ನು ಆಶ್ರಯಿಸು.

**ನಾನಾ-ವಿಧಾರ್ತಿ-ಗ-ದೂನಾಂತರೋ ವ್ರಜಸಿ-**

**ಹೀನಾನ್ ಗುರೂಂಶ್ಚ ಭಿಷಜೋಽ**

**-ಜ್ಞಾನಾನ್ ಪರಸ್ವ-ಹೃತಿ-ಪೀನಾನ್ ಸ್ವತೋಪ್ಯನವ**

**ತೀರ್ಣಾನತತ್ತ್ವ-ವಿದುಷಃ॥**

**ಧ್ಯಾನಾಚ್ಚ ಯಸ್ಯ ಗುಣ-ಗಾನಾತ್ಪದಾಂಬು-ಕಣಪಾನಾ-**

**-ದ್ರುಜೋಽತಿವಿಪದೋ**

**ದ್ರಾಂಗ್ ನಾಶಿತಾಃಸ್ಯುರುಪಮಾನಾತಿಗಾನ್ ಶ್ರಯ**

**ಭಜೈನಾನ್ ಗುರೂನುಪಚರ॥೬॥**

ಮಿತ್ರನೇ ಬಗೆಬಗೆಯ ರೋಗ ದುಃಖಗಳಿಂದ ವ್ಯಾಕುಲನಾಗಿ ಹೀನರಾದ ಗುರುಗಳ ಬಳಿಗೂ ದಡ್ಡರಾದ ವೈದ್ಯರ ಬಳಿಗೂ ಹೋಗುವೆ. ಅವರಿಗೆ ಯಾವ ಜ್ಞಾನವೂ ಇರುವದಿಲ್ಲ, ಪರರ ದ್ರವ್ಯವನ್ನು ಅಪಹರಿಸಿ ಅವರು ತಾವೇ ಪುಷ್ಟರಾಗಿರುತ್ತಾರೆ. ಸ್ವತಃ ತಮಗೇ ತಮ್ಮ ದುಃಖಗಳನ್ನು ಪರಿಹರಿಸಲು ಅಶಕ್ತರಾದ ಯಾವ ತತ್ವವನ್ನೂ ತಿಳಿಯದ ಅಂಥ ಗುರುಗಳನ್ನು ಹಾಗೂ ವೈದ್ಯರನ್ನು ಏಕೆ ಅನುಸರಣ ಮಾಡುತ್ತೀ. ಈ ರಾಘವೇಂದ್ರ ಸ್ವಾಮಿಗಳ ಧ್ಯಾನದಿಂದ ಅವರ ಗುಣಗಾನದಿಂದ ಹಾಗೂ ಪಾದೋದಕ ಪಾನದಿಂದ ಎಂಥೆಂಥ ರೋಗಗಳೂ ಪರಿಹಾರವಾಗುತ್ತವೆ, ಆತಂಕಗಳು ದೂರವಾಗುತ್ತವೆ, ಕುತ್ತು-ವಿಪತ್ತುಗಳು ನಾಶವಾಗುತ್ತವೆ. ಆದುದರಿಂದ ಇವರು ಉಪಮಾತೀತರು. ಇಂಥ ಗುರುಗಳು ಬೇರೆ ಯಾರೂ ಇಲ್ಲ, ಅದಕ್ಕಾಗಿ ಇವರನ್ನೇ ಭಜಿಸು. ಇವರ ಸೇವೆಯನ್ನೇ ಮಾಡು.

**ವೇದಾಃ-ಶ್ರುತಾ ಮಧು-ಭಿದೋ ದಾಸತಾಪಿ ನ**

**ಮಯೋದಾಸಿನಾಪ್ಯಕೃತ ಹಾ**

**ಮೋದಾದ್ಯ-ತೀರ್ಥ-ಮುನಿ-ಭೇದಾವಬೋಧಿ**

**ಪರಮೋದಾರ-ವಾಗಧಿಗತಾ॥**

**ಶ್ರೀ-ದಾರ-ದಿವ್ಯ-ತಮ-ಪಾದಾರವಿಂದ-ಮಧು**

**ಕೋ ದಾಸ್ಯತೀತಿ ವಿಮೃಶನ್**

**ತ್ವಾ ಧಾವಿತೋಽಸ್ಮಿ ನುತಿ-ನಾದಾನುನರ್ತಿತ-**

**ಮಹಾ-ದಾನವಾಂತಕ ಗುರೋ॥೭॥**

ನಾನು ವೇದಗಳನ್ನು ಓದಲಿಲ್ಲ, ಉದಾಸೀನ ಸ್ವಭಾವದ ನಾನು ಮಧುಸೂದನನ ದಾಸತ್ವವನ್ನು ಕೂಡ ಅಂಗೀಕರಿಸಲಿಲ್ಲ, ಆನಂದತೀರ್ಥ ಮುನಿಗಳ ಪಂಚಭೇದಗಳನ್ನು ತಿಳಿಸಿ ಹೇಳುವ ಅತ್ಯಂತ ಉದಾರವಾದ ದಿವ್ಯ ಗ್ರಂಥಗಳನ್ನು ನಾನು ಓದಿ ತಿಳಿಯಲಿಲ್ಲ, ಅಂದ ಬಳಿಕ ಲಕ್ಷ್ಮೀ ಪತಿಯಾದ ನಾರಾಯಣನ ಪಾದಾರವಿಂದದ ಸವಿ ಜೇನನ್ನು ನನಗೆ ಯಾರು ಕೊಡುವರು ಎಂದು ವಿಚಾರ ಮಾಡಿ ಸ್ತುತಿ ಗಾನದಿಂದ ಆ ಭಗವಂತನನ್ನು ಕುಣಿಸಿ ಬಿಡುವ ತಮ್ಮ ಹತ್ತಿರ ಓಡಿ ಬಂದಿದ್ದೇನೆ.

**ಶ್ರೀಪಾದಧುರ್ಯ ತವ ಹೀ ಪಾದುಕಾರ್ಚನ-**

**-ಮಿಹಾಪಾದಯತ್ಯತಿಸುಖಂ**

**ತೇ ಪಾದ-ಪೂಜನ-ಜಲಾಪಾನಮಾಪದುಪ-**

**-ತಾಪಾನ್ನಿಹಂತಿ ಭಜತಾಮ್।**

**ಗೋಪಾಲ-ಕೃಷ್ಣ-ಚರಣೋಪಾಸನಾಪ್ತ-ಮಹಿ-**

**-ಮಾ ಪಾಮರೋದ್ಧೃತಿ ಪಟುಃ**

**ಭೂ-ಪಾರಿಜಾತ ದಯಯಾ ಪಾಹಿ ಮಾಂ ತ್ವಮಿಹ**

**ಪಾಪಾವಲೇಪ-ಕಲುಷಮ್॥೮॥**

ಶ್ರೀಪಾದರಾದ, ಸನ್ಯಾಸಿಗಳಲ್ಲಿ ಶ್ರೇಷ್ಠರಾದ ಶ್ರೀ ರಾಘವೇಂದ್ರ ಗುರುಗಳೇ ತಮ್ಮ ಪಾದುಕೆಗಳ ಅರ್ಚನೆಯು ಜನರಿಗೆ ಅತ್ಯಂತ ಸುಖವನ್ನು ನೀಡುತ್ತದೆ ಹಾಗೂ ನಿಮ್ಮ ಪಾದ ಪೂಜನ, ಪಾದೋದಕ ಪಾನಗಳು ಸೇವಕರ ಆಪತ್ತುಗಳನ್ನೂ, ತಾಪಗಳನ್ನೂ

ಕಳೆಯುತ್ತವೆ. ನಿಮಗೆ ಇಂಥ ಮಹಿಮೆಯು ಗೋಪಾಲಕೃಷ್ಣನ ಚರಣ ಉಪಾಸನೆಯಿಂದ ಪ್ರಾಪ್ತವಾಗಿರುತ್ತದೆ. ನೀವು ಭೂಲೋಕದ ಕಲ್ಪವೃಕ್ಷವಿದ್ದಂತೆ. ಪಾಪಗಳ ಲೇಪದಿಂದ ಕಲುಷಿತನಾದ ನನ್ನನ್ನು ರಕ್ಷಣೆ ಮಾಡಿರಿ.

**ತುಂಗಾ-ತಟೇಽಸ್ತಿ ಹಿ ತುರಂಗಾಸ್ಯ-ಸೇವನ-ಪ್ರ**
**ಸಂಗಾದರೋ ಗುರುರಸೌ-**
**ಷಂಗಾನುಭೂತಿಮಿಹ ಗಂಗಾಧರಾತ್ಪರಮ-**
**-ನಂಗಾಯ ಯೋಽದಿಶದಹೋ।**
**ತಂ ಗಾಢ-ಭಕ್ತಿ-ಭರತೋಽಂಗಾಂಡಜಾಸನಮಲಂ**
**ಗಾಯಮಾನಮಶುಭೋ-**
**ದ್ಭಂಗಾಯ ನಂದನತರುಂ ಗಾಂ ಗತಂ ಹೃದಿ**
**ತರಂಗಾಯಮಾನಕರುಣಮ್॥೯॥**

ತುಂಗಾ ತೀರದಲ್ಲಿ ಹಯಗ್ರೀವದೇವರ ಸೇವಾ ಪ್ರಸಂಗದಲ್ಲಿ ಅತ್ಯಾದರವುಳ್ಳ ಒಬ್ಬರು ಗುರುಗಳು ಇರುತ್ತಾರೆ. ಅವರು ಮಹಾದೇವರ ಅನಂತರ ಕಾಮದೇವರಿಗೆ ಸೋಲಿನ ರುಚಿ ತೋರಿಸಿದವರು. ಅತ್ಯಂತ ಭಕ್ತಿ-ಭರದಿಂದ ಗರುಡಾಸನನಾದ ಶ್ರೀ ಹರಿಯನ್ನು ತಮ್ಮ ಗಾಯನದಿಂದ ಓಲೈಸುತ್ತಾರೆ. ಸ್ವರ್ಗದಲ್ಲಿಯ ನಂದನ ವನದಲ್ಲಿಯ ಕಲ್ಪವೃಕ್ಷವೇ ಭೂಮಿಗೆ ಬಂದಂತೆ ಅವರು ಇರುವರು. ಅವರ ಅಂತರಂಗದಲ್ಲಿ ಕರುಣಾರಸವು ಯಾವಾಗಲೂ ತರಂಗಾಯಮಾನವಾಗಿರುತ್ತದೆ. ನಿಮ್ಮ ಅಶುಭ ಅಮಂಗಲ ಭಂಗವಾಗಲಿಕ್ಕೆ ಆ ಗುರುಗಳನ್ನು ಹೃದಯದಲ್ಲಿ ಧ್ಯಾನ ಮಾಡಿ ಅವರಿಗೆ ಶರಣು ಹೋಗು.

**ಕೃಷ್ಣಾರ್ಚಕಂ ವಿನುತ-ಕೃಷ್ಣಾ-ಪತಿಂ ಜಲದ-**
**-ಕೃಷ್ಣಾಭಮಾಂತರ-ತಮೋಽ**
**ತೃಷ್ಣಾಂಶು ಮಾಗಮನದೀಷ್ಣಂ ಗುರುಂ ವಿಗತ-**
**-ತೃಷ್ಣಾ-ವಿಶುದ್ಧ-ಹೃದಯಮ್**
**ಕೃಷ್ಣಾಜಿನಸ್ಥಿತಮಕೃಷ್ಣಾಂತರಂ ಪ್ರಣಮ**
**ಪೂಷ್ಣಾ ಸಮಂ ಹಿ ಯದಯಂ**
**ಮುಷ್ಣಾತಿ ದುಃಖ ಮಿಹ ಪುಷ್ಣಾತಿ ಸೌಖ್ಯಮಪಿ**
**ನಿಷ್ಣಾತ ಈದೃಶ-ಕೃತೌ॥೧೦॥**

ಶ್ರೀ ರಾಘವೇಂದ್ರ ಸ್ವಾಮಿಗಳು ಕೃಷ್ಣನ ಅರ್ಚಕರು ಕೃಷ್ಣಾ ಎಂದರೆ ದ್ರೌಪದಿಯ ಪತಿಯಾದ ಭೀಮಸೇನನನ್ನು ಸ್ತೋತ್ರ ಮಾಡುವವರು. ಮೇಘದಂತೆ ಕೃಷ್ಣ ವರ್ಣದಿಂದ ಶೋಭಿಸುವವರು. ಹೃದಯದಲ್ಲಿ ಇರುವ ಅಜ್ಞಾನವೆಂಬ ಕತ್ತಲೆಯನ್ನು ಸೂರ್ಯನಂತೆ ಕತ್ತರಿಸುವವರು. ವೇದ ಶಾಸ್ತ್ರಗಳಲ್ಲಿ ಮಹಾ ಪಂಡಿತರು. ಅವರಿಗೆ ಆಶೆಯೆಂಬುದೇ ಇಲ್ಲ, ಪರಿಶುದ್ಧ ಹೃದಯದವರು. ಅವರ ಹೃದಯವು ನಿರ್ಮಲ. ಅವರು ಸೂರ್ಯನಂತೆ ತೇಜೋಭಾಸುರರು. ಕೃಷ್ಣಾಜಿನದಲ್ಲಿ ಆಸೀನರಾದ ಅವರನ್ನು ನೀನು ನಮಸ್ಕರಿಸು ಯಾಕೆಂದರೆ ಅವರು ನಿನ್ನ ದುಃಖವನ್ನು ಕಳೆಯುತ್ತಾರೆ, ಸೌಖ್ಯವನ್ನು ಬೆಳೆಸುತ್ತಾರೆ. ಇಂಥ ದುಃಖ ಹರಣ ಸೌಖ್ಯಭರಣ ರೂಪವಾದ ಕಾರ್ಯದಲ್ಲಿ ಅವರು ನಿಷ್ಣಾತರಾಗಿದ್ದಾರೆ.

**ಶ್ರೀಲಾಃ ಸಮೇಽಪ್ಯವನಿ-ಪಾಲಾ ಮೃತಾಶ್ಚ ಮುನಿ-**
**ಮಾಲಾಸು ಕೋಽಸ್ತಿ ನ ಮೃತಿ**
**-ವ್ಯಾಲಾರ್ದಿತಸ್ತ್ವದಿಹ ಲೋಲಾಂಬುಬುದ್‌ಬುದಸ-**
**-ಲೀಲಾಽಸ್ಥಿರಂಚ ಸಕಲಮ್**
**ಕಾಲಾತಿಗಾತ್ಮ-ಪದವೀ-ಲಾಘುಕೋ ಯದಿ ಸು-**
**-ಧಾಲಾಪಿನಂ ಶ್ರಯ ಗುರುಂ**
**ಶೀಲಾಭಿಶಾಲಿ-ಮುನಿ-ಜಾಲಾದೃತಂಕಿಟಜಯಾ ವಿಮಲ-**
**-ಕೋಲಾತ್ಮಜಾ-ತಟ-ಗತಮ್॥೧೧॥**

ಜಗತ್ತಿನಲ್ಲಿರುವ ಎಲ್ಲ ಶ್ರೀಮಂತರೂ ರಾಜ ಮಹಾರಾಜರೂ ಮರಣ ಹೊಂದಿದ್ದಾರೆ. ಮುನಿ ಮಂಡಲದಲ್ಲಿಯೂ ಮರಣ ರೂಪ ಸರ್ಪದಿಂದ ಆಹತರಾಗದವರು ಯಾರೂ ಉಳಿದಿಲ್ಲ, ಈ ಜಗತ್ತಿನಲ್ಲಿ ಎಲ್ಲವೂ ಚಂಚಲವಾದ ನೀರೊಳಗಿನ ಗುಳ್ಳೆಗಳಂತೆ ಅಸ್ಥಿರವಾಗಿರುತ್ತದೆ. ಕಾಲಾತೀತವಾದ ಪರಮಾತ್ಮನ ಪಾದವೆಂಬ ಪದವಿಯನ್ನು ನಿಜವಾಗಿಯೂ ನೀನು ಹೊಂದಲು ಬಯಸಿದರೆ ಸುಧಾ ಗ್ರಂಥವನ್ನು ಓದಿ ಅರಗಿಸಿಕೊಂಡು ಮಾತುಮಾತಿನಲ್ಲಿಯೂ ಅಮೃತವನ್ನು ಸುರಿಸುವ ರಾಘವೇಂದ್ರ ಸ್ವಾಮಿಗಳನ್ನು ಆಶ್ರಯಿಸು. ಶೀಲ ಸಂಪನ್ನರಾದ ಮುನಿಗಳ ಸಮೂಹದಿಂದ ಆದರಿಸಲ್ಪಟ್ಟ ಅವರು ನಿರ್ಮಲವಾದ ತುಂಗಾ ತೀರದಲ್ಲಿ ನೆಲೆಸಿರುತ್ತಾರೆ.

**ಕ್ಷೇಮಾಯ ಯೋ ವಸುಮತೀಮಾಗತೋ ವಿಲಸ-**
**-ತೀಮಾಂ ಶ್ರಿತಾರ್ತಿ-ದುರಿತ-**
**ಸ್ತೋಮಾಪಹಃ ಸಕಲ-ಸಾಮಾಜಿಕೋನ್ನತಿ-**
**-ಕರೋ ಮಾಧ್ವನಾಯಕಮಣಿಃ।**
**ಶ್ರೀಮಾನ್ ಧಿಯಾ ಜಗತಿ ಧೀಮಾಂಶ್ಚ ತತ್ತ್ವದೃಶಿ**
**ಯೋ ಮಾನ ಮೋಹರಹಿತೋ**
**ಭಾಮಾ-ಪತಿ-ಪ್ರಣಯಿ-ಭೀಮಾನುಗೋ ಹರತು**
**ಭೀಮಾಽಮಯಾನ್ ಭವ-ಭವಾನ್॥೧೨॥**

ರಾಘವೇಂದ್ರ ಸ್ವಾಮಿಗಳು ಜಗತ್ತಿನ ಕ್ಷೇಮಕ್ಕಾಗಿ ಈ ಭೂಲೋಕಕ್ಕೆ ಬಂದಿರುತ್ತಾರೆ. ಆಶ್ರಯಿಸಿದವರ ದುಃಖ ಮತ್ತು ಪಾಪಗಳ ಸಮೂಹವನ್ನು ಅವರು ನಾಶ ಮಾಡುತ್ತಾರೆ. ಎಲ್ಲ ಸಮಾಜದ ಉನ್ನತಿಯನ್ನು ಅವರು ಮಾಡುತ್ತಾರೆ. ಮಧ್ವ ಮತದ ಅನುಯಾಯಿಗಳ ನಾಯಕ ಮಣಿಗಳಾಗಿ ಶೋಭಿಸುತ್ತಿದ್ದಾರೆ. ಬುದ್ಧಿಯಿಂದ ಅವರು ಈ ಜಗತ್ತಿನಲ್ಲಿ ಶ್ರೀಮಂತರು, ತತ್ವಜ್ಞಾನದಲ್ಲಿ ಧೀಮಂತರು, ಅವರಿಗೆ ಯಾವದೇ ತರಹದ ಗರ್ವ ಮೋಹಗಳು ಸುತರಾಂ ಇರುವದಿಲ್ಲ, ಸತ್ಯಭಾಮಾಪತಿಯಾದ ಶ್ರೀ ಕೃಷ್ಣನ ಪ್ರೀತಿಪಾತ್ರರಾದ ಅವರು ಬಲಭೀಮನ ಅನುಯಾಯಿಗಳು. ಈ ಸಂಸಾರದಿಂದ ಉದ್ಭವವಾಗುವ ನಮ್ಮ ಸಕಲ ರೋಗಗಳನ್ನು ಅವರು ಪರಿಹರಿಸಲಿ.

**ಪೀತಾ ಹಿ ಯೇನ ವರಪೀತಾಂಬರೋದಿತ-**
**-ಸುಗೀತಾ ಸುಧಾ ಚ ವಿವೃತಾ**
**ವಾತಾಗಮಾಬ್ಧಿ-ನವನೀತಾಯಿತಾಃಸುಮತಿ-**
**-ನಾ ತಾತ್ವಿಕಾಶ್ಚ ಕೃತಯಃ।**
**ಪೂತಾತ್ಮನಾ ನನು ಪ್ರಣೀತಾಶ್ಚ ಮುಕ್ತಿಮುಪ**
**ನೀತಾಸ್ತದರ್ಹ-ಸುಜನಾಃ**
**ಶಾತಾಯ ಮೇ ಭವತು ಸೀತಾ-ಪತೀಷ್ಟ-ಯತಿ-**
**-ಶೀತಾಂಶುರೇಷ ಗುರುರಾಟ್॥೧೩॥**

ಶ್ರೀ ರಾಘವೇಂದ್ರ ಸ್ವಾಮಿಗಳು ಶ್ರೀ ಕೃಷ್ಣನು ಹೇಳಿದ ಗೀತೆಯನ್ನು ಮತ್ತು ಜಯತೀರ್ಥರ ಸುಧಾ ಗ್ರಂಥವನ್ನು ಪಾನ ಮಾಡಿದ್ದಾರೆ ಮತ್ತು ಅವೆರಡಕ್ಕೂ ವ್ಯಾಖ್ಯಾನವನ್ನು ಬರೆದಿದ್ದಾರೆ. ಒಳ್ಳೆಯ ಬುದ್ಧಿವಂತರಾದ ಅವರು ಮಧ್ವ ಶಾಸ್ತ್ರವೆಂಬ ಸಮುದ್ರವನ್ನು ಕಡೆದು ಪಡೆದ ಬೆಣ್ಣೆಯಂತಿರುವ ಅನೇಕ ತಾತ್ವಿಕ ಕೃತಿಗಳನ್ನು ರಚಿಸಿದ್ದಾರೆ. ಪೂತಾತ್ಮರಾದ ಅವರು ರಚಿಸಿದ ಆ ಗ್ರಂಥಗಳಿಂದ ಎಷ್ಟೋ ಸಜ್ಜನರು ಮುಕ್ತಿಯನ್ನು ಹೊಂದಿದ್ದಾರೆ. ಸೀತಾಪತಿ ಶ್ರೀ ರಾಮನಿಗೆ ಅತ್ಯಂತ ಇಷ್ಟ ಯತಿ ಚಂದ್ರನಂತಿರುವ ಈ ರಾಘವೇಂದ್ರ ಸ್ವಾಮಿಗಳು ನಮಗೆ ಕಲ್ಯಾಣವನ್ನು ಉಂಟು ಮಾಡಲಿ.

**ರಾಮಾ-ವಿರಕ್ತಿರಭಿರಾಮಾಂಗ-ಕಾಂತಿ-ಯುತ-**
**-ರಾಮಾನುಸಕ್ತಹೃದಯೋಽ**
**ಕಾಮಾಽಹತೋಽಪ್ಯಖಿಲ ಕಾಮಾನ್ ದದಾತಿ ಸುರ-**
**-ಕಾಮಾದಿ-ಧೇನು ರಿವ ಯಃ।**
**ಧಾಮಾದ್ಯಸಂಗ್ಯಪಿ ಸುಧಾಮಾಽರ್ಚಯಂಶ್ಚ**
**ಬಹುಧಾ ಮಾಧವಾಂಘ್ರಿಯುಗಲಂ**
**ಮಾಮಾರ್ತಮುದ್ಧರತು ಸಾಮಾನ್ಯ-ಶಿಷ್ಯ ಇತಿ**
**ಭೂ ಮಾನ್ಯಸದ್ಗುರುವರಃ॥೧೪॥**

ಶ್ರೀ ರಾಘವೇಂದ್ರ ಗುರುಗಳು ರಾಮಾವಿರಕ್ತರು ಎಂದರೆ ಸ್ತ್ರೀಯಿಂದ ವಿರಕ್ತರು. ಆದರೂ ರಾಮಾನುಸಕ್ತ ಹೃದಯರು ಎಂದರೆ ರಾಮನಲ್ಲಿ ಆಸಕ್ತವಾದ ಹೃದಯರು ಹಾಗೂ ಅಭಿರಾಮವಾದ ಎಂದರೆ ಸುಂದರವಾದ ದೇಹ ಕಾಂತಿಯುಳ್ಳವರು. ಅವರು ಎಂದೂ ಕಾಮನಿಂದ ಹತರಾಗಿಲ್ಲ ಆದರೂ ಎಲ್ಲರ ಕಾಮನೆಗಳನ್ನು ಪೂರೈಸುತ್ತಾರೆ. ಅವರು ಭೂ ಲೋಕದ ಕಾಮಧೇನುವಿನಂತೆ ಇಷ್ಟಪ್ರದರಾಗಿದ್ದಾರೆ. ಅವರು ಧಾಮಾದಿಗಳ ಸಂಗ ರಹಿತರಾಗಿದ್ದಾರೆ ಅಂದರೆ ಮನೆ ಮಾರು ಮುಂತಾದವುಗಳ ಲೋಲುಪತೆ ಅವರಿಗೆ ಇಲ್ಲ, ಆದರೂ ಒಳ್ಳೆಯ ಕಾಂತಿ ಸಂಪನ್ನರೂ ಆಗಿರುತ್ತಾರೆ. ಶ್ರೀ ಮಾಧವನ ಚರಣ ಯುಗಲಗಳನ್ನು ಬಹುಪರಿಯಿಂದ ಪೂಜೆ ಮಾಡಿರುತ್ತಾರೆ. ಇಂಥ ಸನ್ಮಾನ್ಯರಾದ ಈ ಸದ್ಗುರುಗಳು ನನ್ನನ್ನು "ಇವನು ನನ್ನ ಒಬ್ಬ ಸಾಮಾನ್ಯ ಶಿಷ್ಯ" ಎಂದು ತಿಳಿದು ಆ ಗುರು ಶ್ರೇಷ್ಠರು ಉದ್ಧರಿಸಲಿ.

**ಭೀಷಾ ಹಿ ಯಸ್ಯ ಶಿವ-ಭೂಷಾಮಣೀಂದುರಥ**
**ಪೂಷಾಪ್ಯುದೇತಿ ನಿಯಮೇ-**
**-ನೈಷಾ ಚ ವೇದಪರಿಭಾಷಾ ಪ್ರಶಂಸಿತು ಮ-**
**-ಶೇಷಾನ್ ಕ್ಷಮೇತ ನ ಗುಣಾನ್।**
**ಶೇಷಾದ್ರಿಗಸ್ಯ ನಿಜತೋಷಾಯ ದುಃಖತತಿ-**
**-ಶೋಷಾಯ ಕಿಂ ನು ಕರುಣಾ-**
**ಕಾಷಾಯ-ವಸ್ತ್ರ-ಗುರು-ಪಾಷಾಣ-ಮೂರ್ತಿ-ವರ-**
**-ವೇಷಾ ವಿರಾಜತಿ ಹರೇಃ॥೧೫॥**

ಯಾರ ಭಯದಿಂದ ಮಹಾದೇವರ ತಲೆಯ ಮೇಲೆ ಇರುವ ಚಂದ್ರನೂ ಮತ್ತು ಸೂರ್ಯನೂ ತಪ್ಪದೇ ನೇಮದಿಂದ ಉದಯವನ್ನು ಹೊಂದುತ್ತಾರೋ ಮತ್ತು ಯಾರ ಗುಣಗಳನ್ನು ಸಂಪೂರ್ಣವಾಗಿ ಹೊಗಳಿ ಹೇಳಲು ಈ ಪ್ರಸಿದ್ಧವಾದ ವೇದದ ಪರಿಭಾಷೆಯೂ ಕೂಡ ಸಮರ್ಥವಾಗುವದಿಲ್ಲವೋ ಅಂಥ ತಿರುಪತಿಯ ವೆಂಕಟೇಶ ದೇವರ ಕರುಣೆಯು ತನ್ನ ಭಕ್ತರ ಸಂತೋಷಕ್ಕಾಗಿ ಹಾಗೂ ತನ್ನ ಭಕ್ತರ ದುಃಖ ಜಾಲವನ್ನೆಲ್ಲ ನಾಶ ಮಾಡಲಿಕ್ಕಾಗಿ ಗುರುಗಳ ವೃಂದಾವನ ಮೂರ್ತಿಯ ಕಾಷಾಯ ವಸ್ತ್ರದ ಶ್ರೇಷ್ಠ ವೇಷದಿಂದ ಶೋಭಿಸುತ್ತಲಿದೆ.

**ರಾಮಾಯಣ-ಶ್ರವಣ-ರಾಮಾರ್ಚನಾದಿ ನ ಹಿ**
**ರಾಮಾರತಿಸ್ತು ಕಲಿತಾ**
**ಭಾಮಾಽದೃತಾಽಪಿತು ನ ಭಾಮಾಪತಿರ್ನ ಖಲು**
**ಭೀಮಾದಯೋ, ಮಣಿಮಯಮ್**
**ದಾಮಾಹಿತಂ ನ ತು ಸುದಾಮಾತ್ಮ-ಮಿತ್ರ-ಹರಿ-**

**-ನಾಮಾಧಿಕಂಠಮಮುನಾ**

**ಕಾ ಮಾಮಕೀ ಗತಿ ರಯೇ ಮಾನ್ಯ ಮಸ್ಕರಿ-**

**-ಪತೇ ಮಾಂ ಸಮುದ್ಧರ ಭವಾತ್॥೧೬॥**

ನಾನು ಈ ವರೆಗೂ ರಾಮಾಯಣ ಶ್ರವಣ ಮಾಡಲಿಲ್ಲ, ರಾಮನ ಅರ್ಚನೆಯನ್ನೂ ಮಾಡಲಿಲ್ಲ, ಆದರೆ 'ರಾಮಾ' ಎಂದರೆ ಸ್ತ್ರೀಯರಲ್ಲಿ ಪ್ರೀತಿಯನ್ನು ಮಾಡಿದೆ. ಭಾಮೆಯನ್ನು ಎಂದರೆ ಮಡದಿಯನ್ನು ಆದರಿಸಿದೆ. ಆದರೆ ಸತ್ಯಭಾಮಾಪತಿಯಾದ ಕೃಷ್ಣನನ್ನು ಆದರಿಸಲಿಲ್ಲ, ಅದರಂತೆ ಭೀಮ ಹನುಮ ಮಧ್ವರನ್ನು ನಾನು ಗೌರವಿಸಲಿಲ್ಲ, ಕಂಠದಲ್ಲಿ ದಾಮ ಎಂಬ ಹಾರವನ್ನು ಧರಿಸಿದೆನು. ಆದರೆ ಸುದಾಮನ ಮಿತ್ರನಾದ ಹರಿಯ ನಾಮವನ್ನು ಕಂಠದಲ್ಲಿ ಧರಿಸಲಿಲ್ಲ, ಆದ್ದರಿಂದ ಮಾನ್ಯರಾದ ಯತಿ-ಪತಿಗಳೇ ನನ್ನ ಗತಿಏನು? ಆದ್ದರಿಂದ ನೀವೇ ನನ್ನನ್ನು ಈ ಸಂಸಾರದಿಂದ ಉದ್ಧರಿಸಿರಿ.

**ವಂದಾರ್ವಭೀಷ್ಟ-ವರ-ಸಂದಾನತೋ ಯಶಸಿ**

**ಮಂದಾಯತೇ ಶುಚಿತಯಾ**

**ಮಂದಾರ-ಶಾಖ್ಯಪಿ ಚ ಮಂದಾಕಿನೀ ಬಹುಲ-**

**-ಮಂದಾಕ್ಷ-ಭಾಕ್ ಸಮಭವತ್।**

**ತಂ ದಾನಿ-ಧುರ್ಯ-ಗುರು-ವೃಂದಾರಕಂ ಕಲುಷ-**

**ವೃಂದಾಪಹಂ ಶುಭ-ಕರಂ**

**ವಂದಾಮಹೇ ನನು ಮುಕುಂದಾಪರೋಕ್ಷಿ ವರ-**

**-ವೃಂದಾವನ-ಸ್ಥಿತ-ಯತಿಮ್॥೧೭॥**

ರಾಘವೇಂದ್ರ ಗುರುಗಳು ತಮ್ಮನ್ನು ನಮಸ್ಕರಿಸಿದವರ ಅಭೀಷ್ಟವಾದ ವರಗಳನ್ನೆಲ್ಲ ಕೊಡುವದರಿಂದ ದೇವಲೋಕದ ಕಲ್ಪವೃಕ್ಷದ ಕೀರ್ತಿಯು ಮಲಿನವಾಯಿತು ಮತ್ತು ಇವರ ಶುಚಿತ್ವ ಪಾವಕತ್ವ ರೂಪ ಗುಣಗಳಿಂದ ದೇವ ಮಂದಾಕಿನಿಯಾದ ಗಂಗೆಯೂ ಕೂಡ ಲಜ್ಜಿತವಾದಳು. ದಾನಿ ಶ್ರೇಷ್ಠರೂ ಪಾಪಸಮೂಹವನ್ನೆಲ್ಲ ಕಳೆದು ಸನ್ಮಂಗಲವನ್ನು ಉಂಟು ಮಾಡುವವರೂ ಆದ ಶ್ರೀ ರಾಘವೇಂದ್ರ ಸ್ವಾಮಿಗಳು ಮುಕುಂದನ ಅಪರೋಕ್ಷ ಜ್ಞಾನವನ್ನು ಪಡೆದಿದ್ದಾರೆ. ಶ್ರೇಷ್ಠವಾದ ವೃಂದಾವನದಲ್ಲಿ ಇರುವ ಆ ಯತಿ ಶ್ರೇಷ್ಠರನ್ನು ನಮಸ್ಕರಿಸುತ್ತೇವೆ.

**ವಂಧ್ಯಾ ಸುತಂ, ದೃಶಮಥಾಂಧ್ಯಾನ್ವಿತಃ ಸಮನು**

**ವಿಂದ್ಯಾದ್ಯದೀಯ ಕೃಪಯಾ**

**ವಂದ್ಯಾಽಮರ್ತ್ಯೈಃ ಸಭಿನಂದ್ಯಾನುಭಾವ-ಯುಗ-**

**-ನಿಂದ್ಯಾಽರ್ಯ-ಶೀಲ-ಚರಿತಃ**

**ಸಂಧ್ಯಾರುಣಾಂಶುರಿಹ ಸಂಧ್ಯಾಯತಾಂ ಚ ಮತಿ-**

**-ಮಾಂದ್ಯಾದಿ-ದೋಷಹರಣಃ**

**ಛಿಂದ್ಯಾತ್ತಮೋ ಹೃದಿ ವಿಭಿಂದ್ಯಾನ್ಮಮಾಘ ಮುಪ-**

**-ರುಂಧ್ಯಾತ್ಪುನರ್ಭವ-ರುಜಮ್॥೧೮॥**

ಶ್ರೀ ರಾಘವೇಂದ್ರ ಸ್ವಾಮಿಗಳ ದಯೆಯಿಂದ ಬಂಜೆಯು ಮಗನನ್ನು ಪಡೆಯುವಳು, ಕುರುಡನು ದೃಷ್ಟಿ ಪಾಟವನ್ನು ಪಡೆಯುವನು. ಶ್ರೀ ರಾಘವೇಂದ್ರ ಸ್ವಾಮಿಗಳು ವಂದನೀಯರಾದ ದೇವತೆಗಳಿಂದಲೂ ಅಭಿನಂದನೀಯರಾದವರು. ಅವರ ಶ್ರೇಷ್ಠವಾದ ಶೀಲ ಚರಿತ್ರೆಗಳು ಶ್ಲಾಘ್ಯವಾಗಿವೆ ಅನಿಂದ್ಯವಾಗಿವೆ. ಸಂಧ್ಯೆಯಂತೆ ಕೆಂಬಣ್ಣದ ಶಾಟಿಯನ್ನು ಉಟ್ಟಿರುವ ಗುರುರಾಜರು ತಮ್ಮನ್ನು ಚೆನ್ನಾಗಿ ಧ್ಯಾನ ಮಾಡುವ ಮನುಷ್ಯರ ಬುದ್ಧಿಮಾಂದ್ಯಾದಿ ದೋಷಗಳನ್ನು ಕಳೆಯುವರು. ಅಂಥ ಗುರುಗಳು ನನ್ನ ಹೃದಯದಲ್ಲಿ ಇರುವ ಅಜ್ಞಾನವನ್ನು ಕಳೆಯಲಿ. ನನ್ನ ಪಾಪ ರಾಶಿಯನ್ನೆಲ್ಲ ನಾಶ ಮಾಡಲಿ ಹಾಗೂ ನನ್ನ ಪುನರ್ಜನ್ಮದ ರೋಗವನ್ನು ತಡೆಯಲಿ.

**ಪ್ರೇತಾಃಪಿಶಾಚ-ಗಣ-ಭೂತಾಶ್ಚ ಯತ್ಸ್ಮರಣ-**

**ಭೀತಾ ದ್ರವಂತಿ ವಿದಿಶೋ**

**ವಾತಾ ಗ್ರಹಾಶ್ಚ ವಿಪರೀತಾ ಅಪೀಷದುಪ-**

**-ಘಾತಾಯ ನ ಸ್ಯುರಬಲಾಃ।**

**ಭೂತಾನುಕಂಪಿನಮಭೂತಾತ್ಯ ಪೂರ್ವ-ಗುರು-**

**ಭೂತಾನುಭಾವ-ಮಹಿತಂ**

**ಪ್ರೀತಾಚ್ಯುತಂ ಮಹಿಮ-ಧೂತಾಪದಂ ಸ್ಮರ**

**ಮಹೀ-ತಾಪಸೋತ್ತಮ-ಗುರುಮ್॥೧೯॥**

ಈ ಗುರುಗಳ ಸ್ಮರಣ ಮಾತ್ರದಿಂದ ಭೂತಪ್ರೇತಪಿಶಾಚಿ ಗಣಗಳೆಲ್ಲ ಹೆದರಿ ದಿಕ್ಕಾಪಾಲಾಗಿ ಓಡಿ ಹೋಗುತ್ತವೆ. ಗಾಳಿ-ಗ್ರಹಗಳು ವಿಪರೀತವಾದರೂ ಇವರ ಭಯದಿಂದ ದುರ್ಬಲವಾಗಿ ಕಿಂಚಿದಪಿ ಘಾತ ಪಾತಗಳನ್ನು ಉಂಟು ಮಾಡುವದಿಲ್ಲ, ಈ ಗುರುಗಳು ಎಲ್ಲ ಪ್ರಾಣಿಗಳ ಮೇಲೆ ದಯಾಶೀಲರಾಗಿದ್ದಾರೆ. ಇವರು ಅಭೂತಪೂರ್ವವಾದ ಪ್ರಭಾವ ಮಹಿಮೆಯಿಂದ ಜಗತ್ತಿನಲ್ಲಿ ಕೀರ್ತಿವಂತರಾಗಿದ್ದಾರೆ. ಅಚ್ಯುತನು ಇವರ ಮೇಲೆ ಪರಮ ಪ್ರೀತನಾಗಿದ್ದಾನೆ. ಇವರಿಗೂ ಕೂಡ ಆ ಅಚ್ಯುತನಲ್ಲಿ ಆತ್ಯಂತಿಕ ಪ್ರೀತಿ ಇರುತ್ತದೆ. ಇವರ ಮಹಿಮೆಯಿಂದಲೇ ಆಪತ್ತುಗಳೆಲ್ಲ ಪರಿಹಾರವಾಗುತ್ತವೆ. ಭೂಲೋಕದಲ್ಲಿರುವ ಎಲ್ಲ ತಪಸ್ವಿಗಳಲ್ಲಿ ಅತ್ಯುತ್ತಮರಾದ ಈ ಗುರುಗಳನ್ನು ಸ್ಮರಣೆ ಮಾಡು.

**ಧ್ಯಾತಾ ಹರೇಃ ಸುಗುಣ-ಗಾತಾರ್ಥಿನಾಮಮಿತ**

**ದಾತಾ ಚ ನಾರಕ-ಶುಚಃ**

**ತ್ರಾತಾ ಚ ಮುಕ್ತಿ-ಪಥ-ನೇತಾಽಪಿ ಯೋಗಿ-ಜನ-**

**ಗೀತಾಮಲೋರುಚರಿತಃ।**

**ವಾತಾಗಮಾಬ್ಧಿ ನವನೀತಾಯಿತಾತ್ಮ-ಕೃತಿ-**
**ಜಾತಾಪ್ತ-ವಿಸ್ತೃತ-ಯಶಾಃ**
**ಪಾತಾ ಸ ಮೇ ಭವತು-ಪೂತಾತ್ಮ-ವರ್ಣ್ಯ-ಮಹಿ-**
**-ಮಾ ತಾರಕೋ ಗುರು ವರಃ॥೨೦॥**

ಶ್ರೀ ಹರಿಯ ಸದ್ಗುಣಗಳನ್ನು ಶ್ರೀ ರಾಘವೇಂದ್ರ ಸ್ವಾಮಿಗಳು ಧ್ಯಾನ ಮಾಡಿ ದಾನವನ್ನೂ ಕೂಡ ಮಾಡುತ್ತಾರೆ. ಬೇಡಿ ಬಂದವರ ಅಪರಿಮಿತವಾದ ಅಪೇಕ್ಷಿತಗಳನ್ನೆಲ್ಲ ಪ್ರದಾನ ಮಾಡುತ್ತಾರೆ. ನರಕದ ದುಃಖಗಳಿಂದ ರಕ್ಷಿಸುತ್ತಾರೆ. ಮುಕ್ತಿ ಮಾರ್ಗಕ್ಕೆ ಕರೆದೊಯ್ಯುತ್ತಾರೆ. ಆದುದರಿಂದಲೇ ಇವರ ನಿರ್ಮಲವಾದ ಚರಿತ್ರೆಯನ್ನು ಯೋಗಿ ಜನರೂ ಕೂಡ ಹೊಗಳಿ ಹಾಡುತ್ತಾರೆ. ಮಧ್ವ ಶಾಸ್ತ್ರದ ಹಾಲ್ಗಡಲಿನ ಬೆಣ್ಣೆಯಂತಿರುವ ತಮ್ಮ ಪರಿಮಳ ಪ್ರಕಾಶಾದಿ ಕೃತಿಗಳಿಂದ ವಿಸ್ತಾರವಾದ ಕೀರ್ತಿಯನ್ನು ಹೊಂದಿದ್ದಾರೆ. ಇಂಥ ಪೂತಾತ್ಮರೂ ವರ್ಣನೀಯವಾದ ಮಹಾಮಹಿಮೆಯುಳ್ಳವರೂ ಆದ ರಾಘವೇಂದ್ರ ಗುರುಶ್ರೇಷ್ಠರು ನನಗೆ ತಾರಕರೂ ರಕ್ಷಕರೂ ಆಗಿ ಇರಲಿ.

**ವಂದಾರು-ಭಕ್ತ-ಜನ-ಮಂದಾರ, ಚಾರ್ಥಿ-ವರ-**
**ಸಂದಾಯಕಾಽತಿಶುಚಿತಾ-**
**ಮಂದಾಕಿನೀ-ಸಲಿಲ-ಮಂದಾಕ್ಷ-ವೃದ್ಧಿ-ಕರ**
**ಮಂದಾನ್ಯ-ಭಕ್ತಿ-ಭರತಃ।**
**ವಂದಾಮಹೇ ತ್ವದರವಿಂದಾಭ-ಪಾದಮಿಹ**
**ಕುಂದಾಭ-ಕೀರ್ತಿ-ಮಹಿತಾಽ**
**ನಂದಾಯ-ನೋಽದ್ಯ ಭವ ನಂದಾತ್ಮಜಾಮಲ-**
**ಮುಕುಂದಾಪರೋಕ್ಷಸುದೃಶೇ॥೨೧॥**

ಬಾಗಿ ಬೇಡುವ ಭಕ್ತರಿಗೆ ಮಂದಾರ ವೃಕ್ಷದಂತೆ ಬೇಕಾದ ವರಗಳನ್ನು ಕೊಡುವ ಗುರುಗಳೇ ನಿಮ್ಮ ಪಾವಿತ್ರ್ಯ ಶುಚಿತ್ವಗಳಿಂದ ಮಂದಾಕಿನೀ ನದಿಯ ಲಜ್ಜೆಯು ಬೆಳೆಯುವಂತೆ ಮಾಡಿದ್ದೀರಿ. ಇಂಥ ನಿಮ್ಮ ಅರವಿಂದದಂತೆ ಇರುವ ಪಾದಗಳಿಗೆ ನಮಸ್ಕರಿಸುತ್ತೇವೆ. ಕುಂದ ಕುಸುಮದಂತೆ ಶುಭ್ರವಾದ ಕೀರ್ತಿಯಿಂದ ಮಹಿತರಾದ ತಾವು ನಮಗೆ ನಂದಕುಮಾರನಾದ ಶ್ರೀ ಕೃಷ್ಣನ ಅಪರೋಕ್ಷ ಜ್ಞಾನವು ನಮಗೆ ಆಗುವಂತೆ ಮಾಡಿರಿ ಮತ್ತು ನಮಗೆ ಆನಂದವನ್ನು ನೀಡಿರಿ.

**ಶ್ರೀ-ರಾಮ-ಪಾದ-ಯುಗ-ನೀರಾಜನಾದಿ-ವಿವಿ-**
**-ಧಾಽರಾಧನಾರ್ಚನರತೋ**
**ನಾರಾಯಣೋರು-ಗುಣ-ಸಾರಾಭಿ-ಸಂಸ್ತವನ-**
**ಪಾರಾಯಣಾರ್ಪಿತ-ಮನಾಃ।**
**ಘೋರಾಪದಾಂ ಕು-ಭವ-ಕಾರಾಭುವಾಂಚ ಪರಿ-**
**-ಹಾರಾರ್ಥಮುದ್ಯತ-ಕರಃ**
**ಶ್ರೀರಾಘವೇಂದ್ರ-ಗುರು ರಾರಾತ್ಸಮುದ್ಧರತು**
**ವೈರಾಗ್ಯ-ಮೂರ್ತಿರಿಹ-ಮಾಮ್॥೨೨॥**

ಶ್ರೀ ರಾಮನ ಪಾದ ದ್ವಂದ್ವದ ನೀರಾಜನವೇ ಮೊದಲಾದ ಬಗೆಬಗೆಯ ಪೂಜಾ ಅರ್ಚನಾದಿಗಳಲ್ಲಿ ಆಸಕ್ತರಾದ ಮತ್ತು ನಾರಾಯಣನ ಶ್ರೇಷ್ಠವಾದ ಗುಣಗಳ ಸ್ತೋತ್ರ ಹಾಗೂ ಪಾರಾಯಣದಲ್ಲಿ ಮನಸ್ಸನ್ನು ಅರ್ಪಿಸಿದ ಹಾಗೂ ಕೆಟ್ಟದಾದ ಸಂಸಾರವೆಂಬ ಬಂದೀವನೆಯಲ್ಲಿ ಘೋರತರವಾಗಿ ಬರುವ ಆಪತ್ತುಗಳ ಪರಿಹಾರಕ್ಕಾಗಿ ಕೈ ಎತ್ತಿಕೊಂಡು ನಿಂತಿರುವ ಮತ್ತು ವೈರಾಗ್ಯಮೂರ್ತಿಗಳು ಎನಿಸಿದ ಶ್ರೀ ರಾಘವೇಂದ್ರ ತೀರ್ಥರೆಂಬ ಗುರುಗಳು ನನ್ನನ್ನು ಉದ್ಧಾರ ಮಾಡಲಿ.

ಮಹಾಮಹೋಪಾಧ್ಯಾಯ ಪಂ। ಪಂಢರಿನಾಥಾಚರ್ಯ ಗಲಗಲಿ ವಿರಚಿತ
ಶ್ರೀ ರಾಘವೇಂದ್ರ ಅಶ್ವ ಧಾಥಿಪ ಸ್ತೋತ್ರಮ್ ಎಂಬ ಅಖಂಡ ರಸಸ್ಯಂದಿ ಖಂಡಕಾವ್ಯ ಸಮಾಪ್ತ.